ಎಚ್. ಎಸ್. ಗೋಪಾಲರಾವ್

# ಕೊಂಗುಣಿವರ್ಮ ಮಾಧವನ ಗಣಿಗನೂರು ತಾಮ್ರಪಟಗಳು

ಮೈಸೂರು ಜಿಲ್ಲೆಯ ಯಳಂದೂರು ತಾಲ್ಲೂಕಿನ ಗಣಿಗನೂರು ದಾಖಲೆ ಚಾಮಲಾಪುರ ಗ್ರಾಮದ ನಿವಾಸಿ ಹಾಲಿ ಬೆಂಗಳೂರಿನ ಖಾದಿ ಗ್ರಾಮೋದ್ಯೋಗ ಸಂಸ್ಥೆಯಲ್ಲಿ ಕೆಲಸ ಮಾಡುತ್ತಿರುವ ಶ್ರೀ ಸಿ.ಎಂ. ಬಸವರಾಜು ಅವರಿಂದ ದೊರೆತ, ವಂಶಪಾರಂಪರ್ಯವಾಗಿ ಅವರ ಮನೆಯಲ್ಲಿರುವ ಹಾಗೂ ಆನೆಯ ಮುದ್ರೆ ಸಹಿತ ಬಳೆಗೆ ಸೇರಿಸಿರುವ ೩ ಹಲಗೆಗಳ ತಾಮ್ರಶಾಸನವು ಈಚೆಗೆ ನನ್ನ ಅಧ್ಯಯನಕ್ಕೆ ದೊರೆತಿದೆ.

ಪ್ರತಿ ಹಲಗೆಯು ಉದ್ದ ೨೬.೫ ಸೆಂ. ಮೀ., ಅಗಲ ೬.೫ ಸೆಂ.ಮೀ. ಇದ್ದು, ಉಂಗುರದ ಹೊರ ವ್ಯಾಸ ೭ ಸೆಂ.ಮೀ., ಒಳವ್ಯಾಸ ೫.೭೫ ಸೆಂ.ಮೀ. ಇದೆ. ಉಂಗುರ ಸಹಿತ ತಾಮ್ರಪಟಗಳ ಒಟ್ಟು ತೂಕ ೬೯೫ ಗ್ರಾಂ. ಉಂಗುರದ ತೂಕ ೧೦೫ ಗ್ರಾಂ. ಉಂಗುರವನ್ನು ಆನೆಯ ಲಾಂಛನದ ಮುದ್ರೆ ಬಂಧಿಸಿದೆ.

ಅಧ್ಯಯನಕ್ಕೆ ಲಭ್ಯವಾದ ಗಣಿಗನೂರಿನ ತಾಮ್ರಪಟಗಳಲ್ಲಿ ಮೊದಲನೆಯ ತಾಮ್ರಪಟದ ಕೆಳಭಾಗದಲ್ಲಿ ಮತ್ತು ಮೂರನೆಯ ತಾಮ್ರಪಟದ ಮೇಲ್ಭಾಗದಲ್ಲಿ ಬರವಣಿಗೆ ಇಲ್ಲ. ಮೊದಲನೆಯ ತಾಮ್ರಪಟದ ಮೇಲ್ಭಾಗದಲ್ಲಿ ಶಾಸನವು ಆರಂಭವಾಗಿದೆ. ಉಂಗುರಕ್ಕೆ ತಾಮ್ರಪಟಗಳನ್ನು ಜೋಡಿಸಿರುವ ರೀತಿಯಂತೆ ಮೊದಲನೆಯ ಹಲಗೆ ಕೆಳಭಾಗದಲ್ಲೂ ಮೂರನೆಯ ಹಲಗೆ ಮೇಲ್ಭಾಗದಲ್ಲೂ ಇವೆ. ಆದ್ದರಿಂದ ಮೊದಲನೆಯ ಹಲಗೆಯ ಒಳಭಾಗದಲ್ಲಿ ಶಾಸನದ ಮೊದಲ ಏಳು ಸಾಲುಗಳನ್ನು ಬರೆಯಲಾಗಿದೆ. ಅದಕ್ಕೆ ಅಭಿಮುಖವಾದ ಎರಡನೆಯ ಹಲಗೆಯ ಭಾಗದಲ್ಲಿ ಶಾಸನದ ಮುಂದಿನ ಆರು ಸಾಲುಗಳನ್ನೂ ಹಿಂಭಾಗದಲ್ಲಿ ಆರು ಸಾಲುಗಳನ್ನೂ ಕೊನೆಯ ಹಲಗೆಯ ಒಳಮೈಯಲ್ಲಿ ಐದು ಸಾಲುಗಳನ್ನೂ ಬರೆಯಲಾಗಿದೆ. ಶಾಸನವು ಒಟ್ಟು ೨೪ ಸಾಲುಗಳಲ್ಲಿ ಬರೆಯಲ್ಪಟ್ಟಿದೆ. ಸಂಸ್ಕೃತ ಮತ್ತು ಕನ್ನಡಭಾಷೆಗಳಲ್ಲಿ, ಕನ್ನಡ ಲಿಪಿಯಲ್ಲಿ ಬರೆಯಲ್ಪಟ್ಟಿರುವ ಶಾಸನದ ಪಾಠ ಕೆಳಕಂಡಂತಿದೆ :

**ಶಾಸನದ ಪಾಠ**

೧ ಸ್ವಸ್ತಿಜಿತ ಭಗವತಾಗತ ಘನಗಗನಾಭೇನ ಪದ್ಮನಾಭೇನ ಶ್ರೀ ಮಜ್ಜಾನ್ನ
ವ್ಯಾಯ ಕುಲೋಮಲ ವ್ಯಾಯೋಮಾವಭಾಸನ ಭಾಸ್ಕರ

೨ ಸಖಡ್ಗ ಕ ಪ್ರಹರ ಖಣ್ಡಿತ ಮಹಾಶಿಲಾಸ್ತಮ್ಭಲಬ್ಧ ಭಳವಾರಕ್ರಮ
ವಿದಾರುಣೋರಿಗಣ ವಿದಾರಿಣೋಪಲಬ್ಧವ್ರಣ ವಿಭೂಷಣ ವಿಭೂಷಿತ ಕಾಣ್ವ

೩ ಯನಸಗೋತ್ರ ಶ್ರೀಮಗೊಂಗುಣಿವರ್ಮ್ಮ ದರ್ಮ್ಮ ಮಹಾರಾಜರಾಜಃ ಅಪಿಜ
ಶ್ರೀ ಮದ್ಧರ್ಹಭಟ್ಟಾರಕರ ಸಾಧನ ಪ್ರಸದಿತರಾದಿತವನೇ ಕಥಾದ್ಧರ

೪ ಧಿಮತ್ತ ಪಹಾತಂಗುತ್ತುಂಗ ಕುಭ್ಬಸ್ವಧಾವಲ್ಲರಿ ಮುಕ್ತಪಳಪ್ರಕಟತಟ
ಳತಟ ನದಿ ಭನ್ಯಾವಕಾಭೂಷಣಾಕರ ಪ್ರಭೇಚಾಯರ್ಗಾತಾ

೫ ಯುತ ಭುಜಸ್ತ ಭೂತುವುಧ ರಜ ಲಕ್ಷಾಧಿರಾಜ ಭುಜ ಭಳಾವಷ್ಪಭೀತಾ
ಭ್ಧಿದಾತ್ತ್ಯಾವುಣ್ಣ ಳಭೂತಸವಾರಸವಹಾತಿತೋಧಿರ

೬ ಯುತಖಿಂಪ್ರಖ್ಯಾತ ಕುಳಾನಸ್ಯಯೋಜಯು ಭೂಷಣೋಪಹಾನಿ ಸುರಧಿ
ಪರಾಷುಜನ ಅತಧರ ತದೀಯುಪಹಾನದಾನದರ ಸಂಭಪ್ಪೇತಾದ್ದ್ರಿಪು

೭ ಧುಕರರತಪ್ರ ಕಸ್ಯಾಕಳಾಸಜ್ಞನಸ್ತುತಸ್ವ್ಯಕಳಕ್ರತಾನತವಿಭೀತಿ ಗುಣೀ
ಶಖಾಗಾಭಿತಾಲಂನ್ಯಸ್ವರಯುತಿತವತಿ ಶ್ರೀ -ಎ- ನಿಂಘಗೇಧ

೮ ಆಚಾಯ್ಯ್ಗ ಪ್ರಸದಿತಭುಜಭಳ ಪ್ರಕಪು ಸ್ವಳ್ಯಕ ಪ್ರಹರಖಿಣ್ಡಿತ
ಮಹಾಶಿಲಾಸ್ತಭ್ಮ ಕನ್ಯಕಾರ ಪುಷೋಕ್ರತ ಲಲಟಪ

೯ ಟ್ಬಾಭಿಶಿತಾತ್ತ(ಪೂ)ಜಂಗ ಶ್ರೀ ಕೊಂಗುಣಿಮುಮ್ಮ್ಗಮಹಾರಾಜಾಧಿರಾಜ
ಪರಮೇಸ್ವರ ಪರಮುಭಟ್ಟಾರಕ ಪ್ರದ್ಧಿಗಂಗ ಪಹಾಧವ ಮಹಾರಜ

೧೦ ಧಿರಾಜ ತಳವನಪುರವತೀ ಸಕಪರಿಷೇಷುರ್ಗತೇಷು ನಯುನಗಿರಿಸಶಿ
ಸಮ್ಯ ಸಂವಚ್ಚರೇ ಆಷಡಪಹಾಸೇ ಸುದ್ಧ ಪನ್ಚಮಿ ಗುರು

೧೧ ವಾರೇ ಉತ್ತರೇ ನಕ್ಷತ್ರೇ ಅವ್ರಿತಯೋಗೇ ಸಿನ್ದರವ್ಮ್ಯೋನ್ದಮ್ಮಗವುಣ್ಣನ
ಮಗ ಪಹಾರಮ್ಮಗವುಣ್ಣ ಹೆಡೆಗೆಹಳಿಪರಗಣ್ಣ ಕತ್ತಿಗೆಯು

೧೨ ಭ್ಯೇರವಚಲಧಂಕಾರಾ ಮರಣರಂಸುಡಿಕಾಡ ಹೇಭ್ಬಣರ ಕೇತಮ್ಮಗವುಣ್ಣನ
ಮಗನಿಗುನ್ದನಾಡಳ್ದಮುರ್ಗಕಾಲಭ್ಯೇರವಶ್ಯೋಗಾ

೧೩ ಲ ಪಾರ್ತ್ಥಸಿತಗರಗಣ್ಣ ಮಡಿಮುಕರ ಕದ ಇನ್ನಿಭರು ತಮ್ಮ ಗಟಣಧಿ
ಹೆನ್ಚಮಿನಾಡ ಮುತ್ತಗನೂರ ಛಿಲ್ಲ ಬೆಡಂಗನುಪ ಕೊನ್ನದ

೧೪ ಮಾರನೊ(ಯೇಭ್ಮ)ಭಟರಕಾದಿಕೊನ್ದು ಅವರ ಹೇಡಿ ಬಣ್ಬರವ ಹಿಡಿದು
ಒಪ್ಪಿಸೆ ಗಂಗ ಚಕ್ರವಳ್ತಿ ಮೆಚ್ಚಿ ಕಲ್ದಳಿನಾಡ ಗಣಿಗನೂರ ಕೊಡಂ

೧೫ ಗೆಯು ಕೊಟ್ಟ ತಸ್ಯಸೀಪಹಾನ್ತ ಈಸಾನ್ಯಮೊಕನೋಡಿ ಗಣಿಗನೂರ ಸನೆಗುಡಲ
ಧುವಿಶನ್ದಿವೇಣುವೃಕ್ಷದ ಕೊಳನೋದಕ್ಷಣಮೊಕ

೧೬ ನೋಡಿ ಭೂಮುವೃಕ್ಷವೆ ಕಲ್ಪವ್ರಿಕ್ಷವೆ ಬಿಧಿಪಳ್ಳದಾಣ್ಡೆ ಹೇರೋಭ್ಭಿವಿಡಿದು
ನಡೆದು ಪಕ್ಕಿವಿಳಿಲಿ ಮುತ್ತೇಣಿಯು ದಾಣ್ಪೆ ಭಮ್ಮದಿವನ ಕಲ್ಪವೃ

೧೭ ಕ್ಷಲೆ ಹೇರೋಭ್ಭಿವಿಡದು ನಡೆದು ಪಳ್ಳವ ದಾಣ್ಪೆ ಜೇನಡುವಿನ ಹೇರೊಭ್ಭಿಯೇ
ಅನ್ಗಿಮೊಕನೋಡಿ ಗಣಿಗನೂರ ಬಾಣಪುರದು ವಿ

೧೮ ಸನ್ದಿವಟವೃಕ್ಷವೇ ಪಚ್ಚಿಮುಮೊಕನೋಡಿ ಈಚಿಲ ಹೇರೊಟ್ಟಿಯೇಕಾಜಾಡಲಿಯೆ
ಕೋಕೆಡಿಯೇ ಕಲ್ಪವೃಕ್ಷವೇ ಗೋಸಾಮಿತ್ತಿಯೇ ಒಗತಡಿಯೆ

೧೯ ನರಿತ್ಯಾಮೊಕ ನೋಡಿ ಗಣಿಗನೂರ ಭಾಣಪುರ ಅಮ್ಬೋಳೆಯುತ್ತಿ ಸನ್ದ
ಪಳ್ಳದ ಹೆಗ್ಗಡ ಹೆಲುತರ ಮೊಕನೋಡಿ ಹಳ್ಳವಿಡಿದು

೨೦ ನಡರು ಅಜ್ಜುಣ ವ್ರಿಕ್ಷಲೆ ಹುಳ್ಳು ಕಲ್ಲೆ ಚೂದ ವ್ರಕ್ಷನೇವಾಯಠಾಭ್ಯ ಮೊಕ
ನೋಡಿ ಗಣೆಗನೂರ ಶ್ರೀ ನಿದಿಯಠಾ(......)

೨೧ ಅಡುರ ಕುಕಲ್ಲೆ ನೆದಿಯು ತಡಿವಿಡಿದು ನಡೆದು ಪೂರ್ಬ್ಬ ಮೊಕನೋಡಿ ಕಲ್ಪ
ವೃಕ್ಷಲೆ ಮುತ್ತತ್ತಿಯೆ ಕುಡಿತು ಕುಡ ಈನ್ತಪ್ಪದಕೆ—

೨೨ ಭಡಗರೆನಾಡ ತಳವನಪುರದ ಹಣ್ಣುವಸೋಶಲಿಯು ಮಠಾಗ ಹದಿನಾಡ
ಯೆಕಿಯೂರ ಸೇವಿಸ ಅಮ್ಮೆಳಿಯ ಕಣ್ಣಾದ್ದೆಯ ಆಲೂ

೨೩ ರ ಕೋವ ಸ್ವದತ್ತ ಪರದತ್ತಯೋಹಸ್ಯೋತ ವಸುನ್ಧರ ಷಷ್ಟಿರ್ವರಿಷ
ಸಹಸ್ರಣಾವಿಷ್ಠಾಯ ಜಾಯತೇಕ್ರಿಮಿ ಬಹುಭವ್ವಾಸತಾಭ

೨೪ ಕ್ವಾ ರಾಜಸ್ಯಸರಾಜಭಿಯಸ್ಯಯಸ್ಯಯತಾಭೂಮಿಂ ತಸ್ಯತಸ್ಯತತಾಪಲಂ

**ಶಾಸನದ ಸಾರಾಂಶ :** ಖಡ್ಗದ ಒಂದು ಪ್ರಹಾರದಿಂದ ಶಿಲಾಸ್ತಂಭವನ್ನು ಖಂಡಿಸಿ ಪರಾಕ್ರಮಿ ಯೆಂದು ಪ್ರಖ್ಯಾತನಾದ ಕಾಣ್ವಾಯನಸಗೋತ್ರದ ಶ್ರೀಮತ್ ಕೊಂಗುಣಿವರ್ಮ್ಮ ಧರ್ಮ ಮಹಾರಾಜ ರಾಜನು ಶ್ರೀಮತ್ (ಅರ್ಹದ್ಭಟ್ಟಾರಕರ) ಪ್ರಸಾದದಿಂದ ವಿಪುಲವಾದ ಐಶ್ವರ್ಯವನ್ನು ಪಡೆದನು. ಜೈನಗುರು (ಸಿಂಹನಂದಿ) ಪಂಘಗೋಥ ಆಚಾರ್ಯರ ಅನುಗ್ರಹ ದಿಂದ ಶಿಲಾಸ್ತಂಭವನ್ನು ಖಂಡಿಸುವ ಸಾಮರ್ಥ್ಯವನ್ನು ಪಡೆದನು. ಕರ್ಣಿಕಾರ ಪುಷ್ಪಗಳಿಂದ ಅಲಂಕೃತವಾದ ಲಲಾಟವನ್ನುಳ್ಳ ಶ್ರೀಕೊಂಗುಣಿವರ್ಮ್ಮ ಮಹಾರಾಜಾಧಿ ರಾಜ ಪೃಥ್ವಿಗಂಗಪಾಧವ ಮಹಾರಾಜನು ತಳವನಪುರ ದಲ್ಲಿದ್ದಾಗ ಗತವರ್ಷ ಶಕ ೧೭೨ (ನಯನಗಿರಿ ಸಶಿ)— ಸೌಮ್ಯ ಸಂವತ್ಸರದ ಆಷಾಢ ಮಾಸದ ಶುಕ್ಲಪಕ್ಷದ ಪಂಚಮಿ ಗುರುವಾರದಂದು ಉತ್ತರಾನಕ್ಷತ್ರ, ಅಮೃತ ಯೋಗಗಳ ಸಂದರ್ಭದಲ್ಲಿ ಧರ್ಮಗವುಣ್ಡನ ಮಗ ಮಾರಮ್ಮಗವುಣ್ಡ, ಹೇಡಿಗಳನ್ನು ಹಳಿಯುವ, ಕತ್ತಿಗೆಯ ಭೈರವ ಇತ್ಯಾದಿ ಗುಣವಿಶೇಷಗಳನ್ನುಳ್ಳ ಕೇತಮ್ಮ ಗವುಣ್ಡನ ಮಗ ನೀರ್ಗುಂದನಾಡನ್ನಾಳಿದ ಕದ— ಇಬ್ಬರೂ ತಮ್ಮ ಆಳ್ವಿಕೆಯ ಭಾಗದಲ್ಲಿ ಕೊನ್ತದ ಮಾರನ ಜೊತೆಗೆ ಹೋರಾಡಿ, ಅವರ ಹೇಡಿ ಭಂಟರನ್ನು ಹಿಡಿದು ಒಪ್ಪಿಸಲು ಗಂಗ ಚಕ್ರವರ್ತಿಯು ಮೆಚ್ಚಿ ಕಲ್ದಳಿನಾಡ ಗಣಿಗನೂರನ್ನು ಕೊಡುಗೆಯಾಗಿ ಕೊಟ್ಟಿದ್ದಾನೆ. ಇದಕ್ಕೆ ಸೀಮಾ ವಿವರಗಳೂ ಇವೆ.

ಆಯಾ ಸೀಮೆಗಳ ಎಲ್ಲೆಗಳನ್ನು ಮರ, ಕೊಳ, ಪೊದೆಗಳ ಮೂಲಕ ನಿರ್ದೇಶಿಸಿರುವುದೇ ಅಲ್ಲದೆ ಬಾಣ ಪುರದ ಪ್ರಸ್ತಾಪವೂ ಇದೆ.

ಶಾಸನಕ್ಕೆ ಭಡಗೆರೆನಾಡ ತಳವನಪುರದ ಹಣ್ಣುವ, ಸೋಶಲಿ(ಸೋಸಲೆ)ಯ ಮಠಾಗ, ಹದಿನೆಂಡ ಯೆಕಿಯಠಾರಿ ಸೇವಿಸ, ಅಮ್ಮೆಳಿಯ ಕಣ್ಣಾನ್ದೆಯ, ಆಲೂರ ಕೋವ ಇವರುಗಳು ಸಾಕ್ಷಿಗಳಾಗಿದ್ದಾರೆ.

ಶಾಸನಾಂತ್ಯದಲ್ಲಿ ಶಾಪಾಶಯವಿದೆ.

**ಶಾಸನದ ಭಾಷೆ :** ಆರಂಭದಿಂದ ದಾನ ನೀಡಿದ ಕಾಲದ ಪ್ರಸ್ತಾಪದವರೆಗೆ ಮತ್ತು ಶಾಪಾಶಯದ ಭಾಗ ಸಂಸ್ಕೃತ ಭಾಷೆಯಲ್ಲಿದೆ. ಉಳಿದ ಭಾಗ ಅಂದರೆ ವೀರರ ಪ್ರಸ್ತಾಪ, ಮೆಚ್ಚಿ ನೀಡಿದ ದಾನ ಮತ್ತು ದಾನದ ಸೀಮಾ ವಿವರಗಳು ಕನ್ನಡಭಾಷೆಯಲ್ಲಿವೆ.

ಈ ಶಾಸನದಲ್ಲಿ ಬಳಸಿರುವ ಭಾಷೆಯು ತೀರಾ ಅಶುದ್ಧವಾಗಿದೆ. ಇದರಿಂದ ಇದು ಯಾವ ಕಾಲಕ್ಕೆ ಸೇರಬಹುದೆಂದು ನಿರ್ಧರಿಸಲು ಸುಲಭವಾಗಿ ಅವಕಾಶ ವಿಲ್ಲವಾಗಿದೆ,

ಉದಾಹರಣೆಗೆ, 'ಪಮ್ನನಾಬೇನ ಶ್ರೀಮಜ್ಞಾನ್ನ ವ್ವಾಯ ಕೂಲೋಮಲವ್ವಾಯೋಮಠಾವಭಾಸನ', 'ಶ್ರೀಮದ್ಧರ್ಹಭಟ್ಟಾಕರ ಸಾಧನ ಪ್ರಸಗಿತರಾದಿತವ ನೇಕ ಧಾದ್ದರದಿ' ಮತ್ತು 'ಮಠಾತಂಗುತ್ತಂಗ ಕುಭ್ಭ ಸ್ವಧಾವಲ್ಲರಿ', 'ಶ್ರೀ ಸಿಂಘಗೋಥ ಆಚಾರ್ಯ್ಯ ಪ್ರಸ ದಿತ ಭುಜಬಳ ಪ್ರಕಮ ಸ್ವಳ್ಯಕ ಪ್ರಹರ ಖಣ್ಡಿತ ಮಹಾ

ಶಿಲಾಸ್ತಭ್ಮ'—ಇತ್ಯಾದಿ ಭಾಗಗಳನ್ನು ಗಮನಿಸಬಹುದು. ಕನ್ನಡಭಾಷೆಯ ಬಳಕೆಯ ಸಂದರ್ಭದಲ್ಲೂ 'ಹೆಡೆಗೆ ಹಳಿವರಗಣ್ಡ ಕತ್ತಿಗೆಯ ಭೈರವ ಚಲಧಂಕಾರಾ ಮರಣರಂ ಸುಡಿಕಾಡ ಹೇಭ್ಬಣರ'—ಮತ್ತಿನ್ನೂ ಹಲವು ಅಶುದ್ಧತೆಗಳು ಗೋಚರಿಸುತ್ತವೆ.

ಅಶುದ್ಧತೆಯ ದೋಷದಿಂದ ಶಾಸನದ ಭಾಷೆಯ ಸ್ಪಷ್ಟ ಸ್ವರೂಪವನ್ನು ಗುರುತಿಸಲಾಗದಿದ್ದರೂ ಈವರೆಗೆ ಪ್ರಕಟವಾಗಿರುವ ಹಲವು ಗಂಗ ತಾಮ್ರಶಾಸನಗಳ ನೆರವಿನಿಂದ ವಿಶೇಷವಾಗಿ ಮಾರಸಿಂಹನ ಕೂಡಲೂರು ತಾಮ್ರಪಟಗಳು ಶಾಸನದ ಪಾಠವನ್ನು ಪರಿಷ್ಕರಿಸಿಕೊಂಡು ಗಮನಿಸಿದರೂ ಭಾಷೆಯ ಆಧಾರದಿಂದ ಶಾಸನದ ಕಾಲವನ್ನು ನಿರ್ಧರಿಸಲು ಅವಕಾಶಗಳಿಲ್ಲವಾಗಿದೆ.

ಶಾಸನದ ಲಿಪಿ : ಶ , ಲ, ದ, ಅಕ್ಷರಗಳು ಕ್ರಿ.ಶ. ೮-೯ನೆಯ ಶತಮಾನಕ್ಕೂ ಜ,ಚ,ರ,ಕ,ಖ, ಇತ್ಯಾದಿ ಅಕ್ಷರಗಳು ೧೨-೧೩ನೆಯ ಶತಮಾನಕ್ಕೂ ಭ ಕಾರವು ಕ್ರಿ.ಶ.೧೩-೧೪ನೆಯ ಶತಮಾನದ ನಾಗರಿ ಸ್ವರೂಪಕ್ಕೂ ಸೇರಿವೆ. ಶ್ರೀ ಕಾರಕ್ಕೆ ಱ ಕಾರವನ್ನು ಬಳಸಲಾಗಿದೆ. 'ಅ' ಕಾರದ ಸಂಜ್ಞೆಗೆ ನಾಗರಿ ಭಾಷೆಯಲ್ಲಿದ್ದಂತಹ ಪಕ್ಕದಲ್ಲಿ ಗೀಟು ಬರೆಯುವ ಕ್ರಮವನ್ನೇ ಇಲ್ಲಿ ಹಲವೆಡೆ ಬಳಸಲಾಗಿದೆ. 'ಭಾ' ಎಲ್ಲೆಡೆಯೂ ನಾಗರಿಯ ಸ್ವರೂಪವನ್ನೇ ಯಥಾವತ್ತಾಗಿ ಉಳಿಸಿಕೊಂಡಿದೆ. ಲಿಪಿ ಸ್ವರೂಪದಿಂದ ಇದು ೧೩-೧೪ನೆಯ ಶತಮಾನಗಳ ಕಾಲಕ್ಕೆ ಸೇರಬಹುದಾಗಿದೆ.

ಶಾಸನದ ಕಾಲ : ಶಾಸನದಲ್ಲೇ 'ಸಕವರಿಷೇಷು ಗತೇಷು ನಯನಗಿರಿಸಶಿ ಸಮ್ಮ ಸಂವಚ್ಛರೇ ಅಷಡ ಮಾಸೇ ಸುದ್ಧ ಪಞ್ಚಮಿ ಗುರುವಾರೇ ಉತ್ತರೇ ನಕ್ಷತೇ ಅಮ್ರಿತಯೋಗೇ' ಎಂದು ಉಲ್ಲೇಖಿತವಾಗಿದೆ. ಅಂದರೆ ಶಾ. ಶ. ೧೭೨-ಅರ್ಥಾತ್ ಕ್ರಿ.ಶ. ೨೫೦ ಈ ಶಾಸನದ ಕಾಲವಾಗುತ್ತದೆ.

ಆದರೆ ಕ್ರಿ. ಶ. ೨೫೦ ಸೌಮ್ಯ ಸಂವತ್ಸರವಾಗಿರಲಿಲ್ಲ. ಅದು ಪ್ರಮೋದೂತ ಸಂವತ್ಸರವಾಗಿತ್ತು—ಆಗಿನ ಸಂವತ್ಸರ ಚಕ್ರದಲ್ಲಿ ಕ್ರಿ.ಶ. ೨೪೯ ಸೌಮ್ಯ ಸಂವತ್ಸರವಾಗಿತ್ತು. ಕ್ರಿ. ಶ. ೨೪೯ರ ಸೌಮ್ಯ ಸಂವತ್ಸರದ ಅಷಾಡ ಶುದ್ಧ ಪಂಚಮಿಯ ಜೂನ್ ೧೪ ಭಾನುವಾರದಂದು ಸಂಭವಿಸಿತ್ತು.

ಕ್ರಿ.ಶ. ೨೫೦ರ ಪ್ರಮೋದೂತ ಸಂವತ್ಸರದ ಆಷಾಡ ಶುದ್ಧ ಪಂಚಮಿಯು ಮೇ ೨೩ ಗುರುವಾರ ಅಥವಾ ಜೂನ್ ೨೨ ಶನಿವಾರ ಸಂಭವಿಸಿತ್ತು (ಆ ವರ್ಷ ಅಧಿಕ ಆಷಾಢ ಸಂಭವಿಸಿತ್ತು).

ಈಗ ನಿರ್ಧಾರಿತವಾಗಿರುವಂತೆ ಕೊಂಗುಣಿವರ್ಮ್ಮನ ಆಳ್ವಿಕೆಯ ಕಾಲವು ಕ್ರಿ. ಶ. ಸುಮಾರು ೩೨೫-೩೫೦.[1] ಇದು ಶಾಸನೋಕ್ತ ಕ್ರಿ. ಶ. ೨೫೦ರ ಈ ವ್ಯಾಪ್ತಿಯಿಂದ ಹೊರತಾಗಿದೆ.

ಶಾಸನೋಕ್ತ ಕಾಲವು ಮೇಲೆ ಉಲ್ಲೇಖಿಸಿದ ಹಲವು ಕಾರಣಗಳಿಂದ ಅನುಮಾನಾಸ್ಪದವಾಗಿದೆ.

ಶಾಸನದ ಭಾಷೆ, ಲಿಪಿಸ್ವರೂಪ, ಅನುಮಾನಾಸ್ಪದ ಕಾಲದ ಉಲ್ಲೇಖಗಳಿಂದಾಗಿ ಈಗ ದೊರೆತಿರುವ ಗಣಿಗನೂರಿನ ತಾಮ್ರಪಟಗಳು, ಈಗಾಗಲೇ ಕೃತಕವೆಂದು ತೀರ್ಮಾನಿಸಲಾಗಿರುವ ಹಲವು ಗಂಗ ತಾಮ್ರಪಟಗಳ ಜೊತೆಗೆ ಮತ್ತೊಂದು ಸೇರ್ಪಡೆಯಾಗಿದೆ.

"The possibility of their being later renderings, contaminated with certain predominant traits of the period in which they were copied, of geunine characters which were perhaps facing destruction cannot be ruled out" ಎಂಬ ಡಾ|| ಕೆ. ವಿ. ರಮೇಶ್ ಅವರ ಕೃತಕ ಎನ್ನಬಹುದಾದ ತಾಮ್ರಪಟಗಳ ಬಗೆಗಿನ ಸಮಾಧಾನಕರ ಅಭಿಪ್ರಾಯ[2] ಮತ್ತು "ಹಳೆಯ ಶಾಸನದ ಪ್ರತಿರೂಪವೆಂದು ಗೊತ್ತಾದ ಪಕ್ಷವೊಂದನ್ನು ಬಿಟ್ಟು ಉಳಿದೆಡೆಗಳಲ್ಲಿ ಲಿಪಿಸ್ವರೂಪವು ನಿರ್ಧಾರಕ ಅಂಶವೆಂದು ಧಾರಾಳವಾಗಿ

1. ಪಿ. ಬಿ. ದೇಸಾಯಿ, ಎಸ್. ಎಚ್. ರಿತ್ತಿ, ಬಿ. ಆರ್. ಗೋಪಾಲ್ : ಎ ಹಿಸ್ಟರಿ ಆಫ್ ಕರ್ನಾಟಕ

2 ಇನ್‌ಸ್ಕ್ರಿಪ್ಷನ್ಸ್ ಆಫ್ ವೆಸ್ಟರ್ನ್ ಗಂಗಾಸ್

ಹೇಳಬಹುದು" ಎಂಬ ಎನ್. ಲಕ್ಷ್ಮೀನಾರಾಯಣರಾವ್ ಮತ್ತು ಆರ್. ಎಸ್. ಪಂಚಮುಖಿ ಅವರುಗಳ ಅಭಿಪ್ರಾಯದ[3] ಹಿನ್ನೆಲೆಯಲ್ಲಿ, "ಮುದ್ರಣ ವ್ಯವಸ್ಥೆಯೇ ಇಲ್ಲದಿದ್ದ ಕಾಲದಲ್ಲಿ ದೇಶದ ಎಲ್ಲೆಡೆಯಲ್ಲೂ ಲಿಪಿಸ್ವರೂಪ ಹೀಗೇ ಇತ್ತು ಎಂದು ನಿಶ್ಚಿತವಾಗಿ ಹೇಳುವುದು ಸಮಂಜಸವಲ್ಲ. ನಿರ್ದಿಷ್ಟ ಶತಮಾನದಲ್ಲಿ, ನಿರ್ದಿಷ್ಟ ಅರಸು ಮನೆತನಗಳ ಆಳ್ವಿಕೆಯ ಸಮಯದಲ್ಲಿ, ಲಿಪಿಸ್ವರೂಪ ಮತ್ತು ಭಾಷಾಸ್ವರೂಪ ಸಾಮಾನ್ಯವಾಗಿ ಹೀಗಿದ್ದಿತು ಎಂಬ ತೀರ್ಮಾನಕ್ಕೆ ಬಂದು, ಆ ಆಧಾರದ ಮೇಲೆ ತಾಮ್ರಶಾಸನಗಳ ನೈಜತೆ ಮತ್ತು ಕೃತಕತೆಗಳ ವಿಶ್ಲೇಷಣೆ ನಡೆಸಬಹುದಾದರೂ ಮೇಲೆ ಸೂಚಿಸಿದ ಪ್ರಾದೇಶಿಕ ವೈಲಕ್ಷಣ ಮತ್ತು ವೈಶಿಷ್ಟ್ಯಗಳನ್ನು ಮರೆಯಬಾರದು" ಎಂದು ಈ ಹಿಂದೆ ನಾನು ಭಾವಿಸಿದ್ದರೂ[4] ಪ್ರತಿಗಳಲ್ಲದ ಕೇವಲ ಸೃಷ್ಟಿತ ಶಾಸನಗಳು ಪರೀಕ್ಷೆಯ ಒಂದಲ್ಲ ಒಂದು ಹಂತದಲ್ಲಿ ಸೋಲುತ್ತವೆ ಎನ್ನುವುದಕ್ಕೆ ಪ್ರಸ್ತುತ ಪ್ರಕಟಿಸುತ್ತಿರುವ ಗಣಿಗನೂರಿನ ತಾಮ್ರಪಟಗಳು ಮುಖ್ಯ ಉದಾಹರಣೆಗಳಾಗಿವೆ. ಕನಿಷ್ಟ ೪ ಶತಮಾನಗಳ ಮಿಶ್ರಿತ ಲಿಪಿಸ್ವರೂಪದ ಅಶುದ್ಧ ಭಾಷೆಯ ಗಣಿಗನೂರಿನ ತಾಮ್ರಪಟಗಳು ಕೃತಕ ತಾಮ್ರಶಾಸನಗಳಿಗೆ ಒಂದು ಉತ್ತಮ ಮಾದರಿಯಾಗುತ್ತದೆ.

ಗಣಿಗನೂರಿನ ತಾಮ್ರಪಟಗಳಲ್ಲಿ ಐತಿಹಾಸಿಕ ಪ್ರತಿಕೂಲಗಳೇನೂ ಇಲ್ಲ ಎನ್ನುವುದು ಸಮಾಧಾನಕರ ಅಂಶಗಳಲ್ಲೊಂದು. ಗಂಗವಂಶದ ಕೇವಲ ಕೊಂಗುಣಿವರ್ಮ್ಮ ಮಾಧವನ ಉಲ್ಲೇಖ ಮಾತ್ರ ಇರುವ ಗಣಿಗನೂರಿನ ಶಾಸನದಪಾಠವನ್ನು ಕೂಡಲೂರಿನ[5] ಈ ಮಾರಸಿಂಹನ ಶಾಸನದಲ್ಲಿನ ಕೊಂಗುಣಿವರ್ಮ್ಮನ ಭಾಗದವರೆಗಿನ ಶಾಸನಪಾಠದಿಂದ ಪರಿಷ್ಕರಿಸಬಹುದಾಗಿದೆ. ಆ ಪ್ರಕಾರ ಅರ್ಹದಭಟ್ಟಾರಕ ಮತ್ತು ಸಿಂಹನಂದಿ ಗುರುಗಳ ಪ್ರಸ್ತಾಪ ಮಹತ್ವದ್ದಾಗಿದೆ.

ಪ್ರಸ್ತುತ ಗಣಿಗನೂರಿನ ತಾಮ್ರಪಟಗಳು ವಿಶ್ವಸನೀಯವಲ್ಲವಾದರೂ ಎರಡು ಪ್ರಮುಖ ಕಾರಣಗಳಿಂದ ಮಹತ್ವ ಪಡೆಯುತ್ತವೆ:

೧. ಇದು ಈವರೆಗೆ ದೊರೆತಿರುವ ಗಂಗರಶಾಸನಗಳಲ್ಲಿ ಕೊಂಗುಣಿವರ್ಮ್ಮನ ಮೊದಲ ಶಾಸನವಾಗಿದೆ.

೨. ಕೃತಕವಾಗಿರದಿದ್ದರೆ ಇಬ್ಬರು ವೀರರನ್ನು ಪರಿಚಯಿಸುವ ಅತ್ಯಂತ ಪ್ರಾಚೀನ ದಾಖಲೆಯಾಗುತ್ತಿತ್ತು.

---

3 ಕರ್ನಾಟಕದ ಅರಸು ಮನೆತನಗಳು, ಧಾರವಾಡ, ೧೯೪೬, ಪು. ೧೧೩–೧೧೪

4 'ತಲಕಾಡು ಗಂಗರ ಕೃತಕ ತಾಮ್ರಶಾಸನಗಳು', ಹರತಿಸಿರಿ (ಹೆಚ್. ವಿ. ವೀರನಾಯಕ 'ಹರತಿ' ನೆನಪಿನ ಸಂಪುಟ), ಹರ್ತಿಕೋಟೆ, ೧೯೮೭, ಪು. ೭೬೬

5 ದಿ ಆನ್ಯುಯಲ್ ರಿಪೋರ್ಟ್ ಆಫ್ ದಿ ಮೈಸೂರು ಆರ್ಕಿಯಾಲಾಜಿಕಲ್ ಡಿಪಾರ್ಟ್‌ಮೆಂಟ್, ೧೯೨೦-೨೧